

# ನಮ್ಮ ಕಾನೂನುಗಳು



## 8 ವರದಕ್ಷಿಣೆ

ಮಹಿಳೆಯರ
ಹಕ್ಕುಗಳು


ಪ್ರಕಾಶಕರು

ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ನಿಯಮಿತ

ಹಾಗೂ

ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

ಕರ್ನಾಟಕ ಸರಕಾರ

ಇವರಿಗಾಗಿ,

ಕವಿ ಕಾವ್ಯ ಟ್ರಸ್ಟ್, ಹೆಗ್ಗೋಡು

1993, ಡಿಸೆಂಬರ್.

ಎಂ. ವೀರಪ್ಪ ಮೊಯಿಲಿ
ಮುಖ್ಯ ಮಂತ್ರಿ

27, ನವೆಂಬರ್, 93.
ಬೆಂಗಳೂರು - 560001.




## ಸಂದೇಶ

ಮಹಿಳೆಯರ ಹಕ್ಕುಗಳನ್ನು ಕುರಿತ ಈ ಪುಸ್ತಕಮಾಲಿಕೆಯನ್ನು ಕನ್ನಡದ ಜನತೆಗೆ ಅರ್ಪಿಸಲಿಕ್ಕೆ ನನಗೆ ತುಂಬ ಹೆಮ್ಮೆ ಎನ್ನಿಸುತ್ತಿದೆ. ದುಡಿಯುವ ಮಹಿಳೆಯರು, ಗ್ರಾಮೀಣ ಮಹಿಳೆಯರು ಹಾಗೂ ಕೆಳವರ್ಗಗಳನ್ನು ಗಂಭೀರ ಸಮಸ್ಯೆಗಳು ಕಾಡುತ್ತಿವೆ. ಅವರು ಸಾಮಾಜಿಕವಾಗಿ ತುಳಿತಕ್ಕೆ ಒಳಗಾಗಿದ್ದಾರೆ. ಕಾರ್ಮಿಕಳಾಗಿ, ಜೀತದಾಳಾಗಿ, ಮದುವೆಯಲ್ಲಿ, ವಿಚ್ಛೇದನದಲ್ಲಿ, ಆಸ್ತಿ ಹಕ್ಕಿನಲ್ಲಿ, ಕೋರ್ಟಿನಲ್ಲಿ, ಠಾಣೆಗಳಲ್ಲಿ, ಆಕೆ ಸಮಸ್ಯೆಗಳನ್ನು ಅನುಭವಿಸುತ್ತಿದ್ದಾಳೆ. ಅನೇಕರು ಅತ್ಯಾಚಾರಕ್ಕೆ ಒಳಗಾಗುತ್ತಾರೆ. ರಾಜ್ಯಾಂಗದತ್ತವಾಗಿ ಹಾಗೂ ಕಾನೂನಿನ ಅಡಿಯಲ್ಲಿ ಅವರಿಗೆ ದಕ್ಕಿರುವ ಹಕ್ಕುಗಳ ಬಗ್ಗೆ ಅವರಿಗೆ ಅರಿವಿಲ್ಲ. ಅಂತಹ ಅರಿವು ಮೂಡದ ಹೊರತು ಅವರ ಮೇಲೆ ನಡೆಯುತ್ತಿರುವ ಶೋಷಣೆಯನ್ನು ನಿಲ್ಲಿಸುವುದೂ ಸಾಧ್ಯವಿಲ್ಲ. ಹಾಗೆಂದು ಭಾರಿ ಗಾತ್ರದ 'ಲಾ' ಪುಸ್ತಕಗಳನ್ನು ಓದಿ ಅರಗಿಸಿಕೊಳ್ಳಿ ಎಂದು ಅನಕ್ಷರಸ್ಥರಿಂದ ಹಾಗೂ ನವ ಸಾಕ್ಷರ ಮಹಿಳೆಯರಿಂದ ಅಪೇಕ್ಷಿಸುವುದೂ ಸಾಧುವಲ್ಲ. ಇಂತಹದ್ದೊಂದು ಸಂದಿಗ್ಧವನ್ನು ನಿವಾರಿಸುತ್ತದೆ, ಈ ಮಾಲಿಕೆಯ ಹತ್ತು ಪುಸ್ತಕಗಳು.

ನಮ್ಮ ಸರ್ಕಾರದ ಕನ್ನಡ ಜಾಗೃತಿ ವರ್ಷದ ಆಚರಣೆಯಲ್ಲಿ ಈ ಪುಸ್ತಕಗಳ ಪ್ರಕಟಣೆ ತುಂಬ ಮಹತ್ವಪೂರ್ಣ ಕೊಡುಗೆ ಎಂದು ನನ್ನ ಭಾವನೆ. ಕನ್ನಡದ ಬೆಳವಣಿಗೆ ತುಂಬ ಅಗತ್ಯವಿರುವುದು ಕೆಳವರ್ಗಗಳಿಗೆ ಹಾಗೂ ಮಹಿಳೆಯರಿಗೆ. ಅವರನ್ನು ಗಮನದಲ್ಲಿಟ್ಟುಕೊಂಡು, ಸರಳವಾದ ಭಾಷೆ ಬಳಸಿ, ಚಿತ್ರಗಳ ಸಹಿತ, ಅವರ ಬದುಕಿಗೆ ಅನ್ವಯಿಸುವ ಉದಾಹರಣೆಗಳೊಂದಿಗೆ, ರಚಿತವಾಗಿರುವ ಈ ಪುಸ್ತಕಗಳು ಕರ್ನಾಟಕದ ಮೂಲೆ ಮೂಲೆ ತಲುಪಬೇಕು ಎಂದು ನಾನು ಆಶಿಸುತ್ತೇನೆ.

(ಎಂ. ವೀರಪ್ಪ ಮೊಯಿಲಿ)

# ವರದಕ್ಷಿಣೆ

ಮೂಲ ಪಾಠ
ಅಭ ಸಿಂಗಲ್ ಜೋಶಿ

ಚಿತ್ರಗಳು
ಪ್ರಸನ್ನ

# ವರದಕ್ಷಿಣೆ

ಇದು ನಿಮ್ಮ ಹಾಗೆ ಒಬ್ಬ ಹುಡುಗಿಯ ಕಥೆ. ನಿರ್ಮಲಳ ಕಥೆ. ನಮ್ಮ ಸಮಾಜದಲ್ಲಿ ಒಬ್ಬ ಹುಡುಗಿ, ತಂದೆ-ತಾಯಿಯ ಇಚ್ಛೆಗನುಸಾರವಾಗಿ ಮದುವೆ ಮಾಡಿಕೊಳ್ಳಬೇಕೆಂದು ಇದೆ. ನಿರ್ಮಲ ತನ್ನ ವಿದ್ಯಾಭ್ಯಾಸ ಮುಗಿಸಿದ ನಂತರ ಕೆಲಸಕ್ಕೆ ಸೇರಬೇಕೆಂದು ಆಸೆ ಇದ್ದರೂ, ಅಪ್ಪ ಅಮ್ಮನ ಇಷ್ಟ ಎಂದು ಮದುವೆಗೆ ಒಪ್ಪಿಕೊಂಡಳು.

ವರನ ಕಡೆಯವರು ವರದಕ್ಷಿಣೆ ಕೇಳುವುದು ಸಂಪ್ರದಾಯ. ನಿರ್ಮಲೆಯ ಮದುವೆಯಲ್ಲಿ ಅವಳ ಅತ್ತೆ - ಮಾವ ಒಂದು ರೆಫ್ರಿಜಿರೇಟರ್, ಎರಡು ಫ್ಯಾನ್‌ಗಳು, ಪೀಠೋಪಕರಣ, 10 ತೊಲ ಬಂಗಾರ ಮತ್ತು 50,000 ರೂ ಗಳ ನಗದನ್ನು ವರದಕ್ಷಿಣೆಯಾಗಿ ಕೇಳಿದರು. ನಿರ್ಮಲಳ ಅಪ್ಪ ಅಮ್ಮ ಬಂಧುಗಳಿಂದ ಸಾಲ ಮಾಡಿ, ಮನೆಯನ್ನು ಅಡಮಾನ ಮಾಡಿ, ಬಹಳ ಕಷ್ಟಪಟ್ಟು ನಿರ್ಮಲೆಯ ಮದುವೆಗೆ ವರದಕ್ಷಿಣೆಯ ವ್ಯವಸ್ಥೆ ಮಾಡಿದರು.

ಅವರು ಮತ್ತೇನು ಮಾಡಲು ಸಾಧ್ಯ ? ಸಂಪ್ರದಾಯಕ್ಕೆ ಬದ್ಧರಾಗಿದ್ದರು;

ಆದರೆ ಕಥೆ ಇಲ್ಲಿಗೇ ಮುಗಿಯಲಿಲ್ಲ. ಅಥವಾ ನಿರ್ಮಲಳ ಅತ್ತೆ ಮಾವಂದಿರ ಬೇಡಿಕೆ ಮುಗಿಯಲಿಲ್ಲ. ಸಂಪ್ರದಾಯದಂತೆ ನಿರ್ಮಲೆ ಹೆತ್ತವರ ಮನೆಯನ್ನು ಬಿಟ್ಟು ಗಂಡನ ಮನೆಗೆ



ಹೋದಳು. ನಮ್ಮ ಸಂಪ್ರದಾಯದಲ್ಲಿ ಒಬ್ಬ ಹುಡುಗಿ ಮದುವೆಯಾಗಿ ಹೆತ್ತವರ ಮನೆ ಬಿಟ್ಟುಹೋದ ನಂತರ, ಅವಳ ಶವಮಾತ್ರವೇ ಗಂಡನ ಮನೆಯಿಂದ ಹೊರ ಬರುತ್ತದೆ ಎಂಬ ಭಾವನೆ ಇದೆ. ನಿರ್ಮಲೆಯ ಪ್ರಕರಣದಲ್ಲಿ ಹೀಗೆ ಆಯಿತು. ವಿವಾಹದ ಎಂಟು ತಿಂಗಳ ನಂತರ ಚಿತ್ರಹಿಂಸೆ ಅನುಭವಿಸಿದ ಮೇಲೆ ನಿರ್ಮಲಳ ಶವ ಗಂಡನ ಮನೆಯಿಂದ ಹೊರಬಂತು. ಇಲ್ಲಿಗೆ ನಿರ್ಮಲೆಯ ಕಥೆ ಮುಗಿಯಿತು. ಶಾಂತಿಯ ಕಥೆ, ನಫೀಸಾಳ ಕಥೆ, ಲಕ್ಷ್ಮಿ ಮತ್ತು ಮಂಜಿತಾಳ ಕಥೆಗಳು ಸಹ ಹೀಗೆಯೇ. ಸಂಪ್ರದಾಯಕ್ಕೆ ಬದ್ಧರಾದ ಹೆತ್ತವರು, ಸಹೋದರರು ಮತ್ತು ಸಹೋದರಿಯರೆಲ್ಲರೂ, ಸುಮ್ಮನೆ ಕಂಬನಿ ಮಿಡಿಯುತ್ತಾ ನಿಲ್ಲುತ್ತಾರೆ ಅಷ್ಟೆ. ಇದು ನಮ್ಮ ಸಂಪ್ರದಾಯ! ನಮ್ಮ ಹುಡುಗಿಯರು ದುಃಖ ಅನುಭವಿಸಲು ಮತ್ತು ಮರಣ ಹೊಂದಲು ಹಣವನ್ನು ಕೊಡುವುದು.

''ನಾವು ಏನು ತಾನೇ ಮಾಡಲು ಸಾಧ್ಯ ?'' ಎಂದು ಎಲ್ಲರೂ ಹೇಳುತ್ತಾರೆ.

ನಾವು ಏನನ್ನಾದರೂ ಏಕೆ ಮಾಡಲಾಗುವುದಿಲ್ಲ ? ಒಂದು ಪದ್ಧತಿ ಅಥವಾ ಸಂಪ್ರದಾಯವು ಸರಿ ಇರದಿದ್ದಲ್ಲಿ ಅದನ್ನು ಬಿಟ್ಟುಬಿಡಬೇಕು. ಕಾನೂನಿನ ನೆರವನ್ನು ಪಡೆಯಬೇಕು. ವರದಕ್ಷಿಣೆಯೆಂಬ ದುಷ್ಟ ಪದ್ಧತಿಯನ್ನು ತೊಡೆದುಹಾಕಲು ಸರ್ಕಾರವು ವಿಶೇಷ ಕಾನೂನುಗಳನ್ನು ರಚಿಸಿದೆ. **ವರದಕ್ಷಿಣಾ ನಿಷೇಧ ಅಧಿನಿಯಮ, 1961** ಅಂಥ ಒಂದು ಕಾನೂನಾಗಿದೆ.



ಈ ಕಾನೂನಿನನ್ವಯ :

- ವರದಕ್ಷಿಣೆಯನ್ನು ಕೊಡುವುದು ಒಂದು ಅಪರಾಧ.
- ವರದಕ್ಷಿಣೆಯನ್ನು ಸ್ವೀಕರಿಸುವುದು ಅಪರಾಧ
- ವರದಕ್ಷಿಣೆಯನ್ನು ಕೊಡುವುದಕ್ಕೆ ಅಥವಾ ತೆಗೆದುಕೊಳ್ಳುವುದಕ್ಕೆ ನೆರವಾಗುವುದು ಅಪರಾಧ
- ವರದಕ್ಷಿಣೆಯನ್ನು ಕೇಳುವುದೂ ಸಹ ಅಪರಾಧ.

ಯಾವನೇ ವ್ಯಕ್ತಿಯು ತನ್ನ ಮಗನ, ಮಗಳ ಅಥವಾ ಬಂಧುಗಳ ವಿವಾಹದಲ್ಲಿ ವರದಕ್ಷಿಣೆಯನ್ನು ತೆಗೆದುಕೊಳ್ಳುವುದು ಅಪರಾಧ.

ವರದಕ್ಷಿಣೆಯನ್ನು ಕೊಡುವ ಯಾವನೇ ವ್ಯಕ್ತಿಯು, ಕಾನೂನಿನನ್ವಯ ಅಪರಾಧಿ ಎಂದೇ ಅರ್ಥ.

ವರದಕ್ಷಿಣೆಯನ್ನು ಕೊಡುವುದಕ್ಕೆ ಅಥವಾ ತೆಗೆದುಕೊಳ್ಳುವುದಕ್ಕಾಗಿ ಈ ಮುಂದಿನ ದಂಡನೆ ವಿಧಿಸಲಾಗುತ್ತದೆ.

- ಐದು ವರ್ಷಗಳವರೆಗಿನ ಕಾರಾವಾಸ
- 15 ಸಾವಿರ ರೂಪಾಯಿಗಳವರೆಗಿನ ಜುಲ್ಮಾನೆ ಅಥವಾ




ವರದಕ್ಷಿಣೆ ಕೊಡುವವರು, ಪಡೆಯುವವರು ಇಬ್ಬರನ್ನೂ ಶಿಕ್ಷಿಸಬಹುದು




- ವರದಕ್ಷಿಣೆಯ ಮೊತ್ತವು 15,000 ರೂ. ಗಳಿಗಿಂತ ಹೆಚ್ಚಾಗಿದ್ದರೆ ವರದಕ್ಷಿಣೆಯಾಗಿ ನೀಡಿದ ಅಥವಾ ತೆಗೆದುಕೊಂಡ ಹಣಕ್ಕೆ ಸಮನಾದ ಜುಲ್ಮಾನೆ.

ಸಾಮಾನ್ಯವಾಗಿ ಮದುವೆಯನ್ನ ಬಂಧುಗಳು ಅಥವಾ ಮಧ್ಯಸ್ಥರ ಮೂಲಕ ಗೊತ್ತುಪಡಿಸಲಾಗುತ್ತದೆ. ಮಧ್ಯಸ್ಥರು ಅಥವಾ ಬಂಧುಗಳು ವರದಕ್ಷಿಣೆಯನ್ನು ಗೊತ್ತುಪಡಿಸುತ್ತಾರೆ. ಈ ಜನರೂ ಸಹ ಕಾನೂನಿನ ದೃಷ್ಟಿಯಲ್ಲಿ ಅಪರಾಧಿಗಳೆ. ಅವರೂ ಸಹ ದಂಡನಾರ್ಹರು.

ವರದಕ್ಷಿಣೆಯನ್ನು ಕೇಳುವುದು ಅಪರಾಧ ಎಂದು ಹಿಂದೆ ಹೇಳಿದೆವು. ವಿವಾಹವು ನೆರವೇರದಿದ್ದರೂ ವರದಕ್ಷಿಣೆ ಕೇಳಿದ ಬಗ್ಗೆ ದೂರು ನೀಡಬಹುದು. ವರದಕ್ಷಿಣೆಯನ್ನು ಕೇಳುವವರ ಬಗ್ಗೆ ಕೂಡಲೇ ಪೊಲೀಸಿಗೆ ದೂರು ಸಲ್ಲಿಸಬೇಕು.

ವರದಕ್ಷಿಣೆಗಾಗಿ ಜಾಹೀರಾತು ನೀಡುವುದು ಒಂದು ಅಪರಾಧ. ಆಗಾಗ್ಗೆ ಪತ್ರಿಕೆಗಳ ಮೂಲಕ ವರನ ಗುಣಲಕ್ಷಣ, ಪ್ರತೀಕ್ಷೆಗಳು ಮತ್ತು ಸಂಪಾದನೆ, ಆತ ಬಯಸುವಂಥ ವರದಕ್ಷಿಣೆಯೊಂದಿಗೆ ವಿವಾಹಕ್ಕಾಗಿ ಜಾಹೀರಾತು ನೀಡುತ್ತಾರೆ. ವರದಕ್ಷಿಣೆಯನ್ನು ಕೇಳುವುದಕ್ಕಾಗಿ ಈ ರೀತಿ ಜಾಹೀರಾತು ನೀಡುವವರನ್ನ ಸಹ ಕಾನೂನಿನ ಪ್ರಕಾರ ಕಾರಾವಾಸ ಮತ್ತು ಜುಲ್ಮಾನೆ ಶಿಕ್ಷೆಗೆ ಗುರಿಪಡಿಸಬಹುದು.




ವರದಕ್ಷಿಣೆ ಕೇಳಿದುದ್ದಕ್ಕೆ ಶಿಕ್ಷೆ.

- **ಕಡೇ ಪಕ್ಷ ಆರು ತಿಂಗಳ ಕಾರಾವಾಸ**
- ಜುಲ್ಮಾನೆ

ವರದಕ್ಷಿಣೆಯ ಪ್ರಚಾರಕ್ಕೆ ಶಿಕ್ಷೆ.

- **ಕಡೇ ಪಕ್ಷ ಆರು ತಿಂಗಳ ಕಾರಾವಾಸ**
- 15,000 ರೂಪಾಯಿ ಗಳವರೆಗಿನ ಜುಲ್ಮಾನೆ

ವರದಕ್ಷಿಣೆಯನ್ನ
ಜಾಹೀರಾತು ಮಾಡುವುದು ಅಪರಾಧ

ವರ

ಮದುವೆ ಮಾರ್ಕೆಟ್

10000000

ಕೆಲವೊಮ್ಮೆ ಹುಡುಗಿಯ ಕಡೆಯವರು ಮಗಳ ಮದುವೆಯಲ್ಲಿ ಇಂತಿಷ್ಟು ಹಣವನ್ನು ಹುಡುಗನ ಕಡೆಯವರಿಗೆ ಕೊಡುವುದಾಗಿ ಪ್ರಕಟಿಸುವುದುಂಟು. ಇದೂ ಸಹ ಒಂದು ಅಪರಾಧ.

**ಹಾಗಾದರೆ, ವಿವಾಹದಲ್ಲಿ ಹುಡುಗ ಅಥವಾ ಹುಡುಗಿಗೆ ಏನನ್ನೂ ಕೊಡಬಾರದೆಂದು ಇದರ ಅರ್ಥವೇ?**

ವಧು, ವರ ಅಥವಾ ಅವರ ಬಂಧುಗಳಿಗೆ ಕೊಡಲಾದಂಥ ಎಲ್ಲ ಉಡುಗೊರೆಗಳು ವರದಕ್ಷಿಣೆಯಲ್ಲಿ ಸೇರುತ್ತವೆ ಎಂದು ಕಾನೂನು ಹೇಳುತ್ತದೆ. ಯಾವುದೇ ಒತ್ತಾಯವಿಲ್ಲದೆ ಸ್ವ ಇಚ್ಛೆಯಿಂದ ಯಾರಾದರೂ ವಧುವಿಗೆ ಮತ್ತು ವರನಿಗೆ ಏನನ್ನಾದರೂ ಕೊಡುವುದಕ್ಕೆ ಅನುಮತಿಯಿದೆ. ಈ ಉಡುಗೊರೆಗಳನ್ನು ಸಹ ಕಾನೂನಿಗನುಸಾರವಾಗಿ ಕೊಡಬೇಕು. ಎಂದರೆ:-

- ಎಲ್ಲ ಉಡುಗೊರೆಗಳ ಪಟ್ಟಿ ಮಾಡಬೇಕು.
- ಈ ಉಡುಗೊರೆಗಳು ಕೇಳಿ ಪಡೆದವು ಅಥವಾ ಒತ್ತಾಯಪೂರ್ವಕವಾಗಿ ಕೊಟ್ಟವುಗಳಾಗಿರಬಾರದು.
- ವಧುವಿಗೆ ನೀಡಲಾದ ಉಡುಗೊರೆಗಳು ಸಾಂಪ್ರದಾಯಿಕವಾಗಿ ಕೊಟ್ಟಂಥವಾಗಿರಬೇಕು. ಅದರ ಬೆಲೆಯು ಅವಳ ತಂದೆತಾಯಿಯರ ಸ್ಥಾನಮಾನ ಮತ್ತು ಜೀವನಮಟ್ಟಕ್ಕೆ ಅನುಸಾರವಾಗಿ ಇರಬೇಕೇ ಹೊರತು ಅದನ್ನು ಮೀರಿ ಇರಬಾರದು.

ವರದಕ್ಷಿಣೆಯು ಹುಡುಗಿಯ ಸ್ವತ್ತು. ಇದು ಅವಳ ''ಸ್ತ್ರೀಧನ'' ದ ಭಾಗ. ಅವಳ ಇಚ್ಛೆಯಂತೆ ಅವಳು ಅದನ್ನು ಉಪಯೋಗಿಸಿಕೊಳ್ಳಬಹುದು. ಹುಡುಗಿಯನ್ನು ಹೊರತುಪಡಿಸಿ ಇತರ ಯಾರಿಗೂ ''ಸ್ತ್ರೀಧನ'' ದ ಮೇಲೆ ಹಕ್ಕಿರುವುದಿಲ್ಲ. ಸಾಮಾನ್ಯವಾಗಿ ಇವುಗಳನ್ನ ವರನಿಗೆ, ಅವನ ಮನೆಯವರಿಗೆ ಅಥವಾ ಬಂಧುಗಳ ವಶಕ್ಕೆ ಒಪ್ಪಿಸಲಾಗುತ್ತದೆ. ಹೀಗಿದ್ದರೂ ಈ ಉಡುಗೊರೆಗಳು ಹುಡುಗಿಗೆ ಸೇರಿದವುಗಳೆಂದು ಕಾನೂನು ಹೇಳುತ್ತದೆ. ಹುಡುಗಿಯಲ್ಲದೆ ಇತರೆ ಯಾರಾದರೂ ಈ ಉಡುಗೊರೆಗಳನ್ನು ತೆಗೆದುಕೊಂಡಲ್ಲಿ ಅದನ್ನು ಹುಡುಗಿಗೆ ಹಿಂದಿರುಗಿಸುವುದು ಕಾನೂನು ಬದ್ಧವಾಗಿರುತ್ತದೆ. ಅದೂ ಅಲ್ಲದೆ ವರದಕ್ಷಿಣೆಯನ್ನು ಕಾನೂನಿನ ಚೌಕಟ್ಟಿನಲ್ಲಿ ನಿರ್ದಿಷ್ಟಪಡಿಸುವ ಅವಧಿಯೊಳಗೆ ಹುಡುಗಿಗೆ ಹಿಂದಿರುಗಿಸಬೇಕು. ಈ ಕಾನೂನಿನನ್ವಯ:

- ವರದಕ್ಷಿಣೆಯನ್ನು ವಿವಾಹಕ್ಕೆ ಮೊದಲು ತೆಗೆದುಕೊಂಡಿದ್ದಲ್ಲಿ ಅದನ್ನು ವಿವಾಹದ ದಿನಾಂಕದಿಂದ ಮೂರು ತಿಂಗಳೊಳಗಾಗಿ ಹುಡುಗಿಯ ವಶಕ್ಕೆ ಒಪ್ಪಿಸಬೇಕು.
- ವರದಕ್ಷಿಣೆಯನ್ನು ವಿವಾಹದ ಕಾಲದಲ್ಲಿ ಅಥವಾ ನಂತರ ತೆಗೆದುಕೊಂಡಿದ್ದಲ್ಲಿ ಅದನ್ನು ತೆಗೆದುಕೊಂಡ ಮೂರು ತಿಂಗಳೊಳಗಾಗಿ ಹುಡುಗಿಯ ವಶಕ್ಕೆ ಒಪ್ಪಿಸಬಹುದು.
- ಹುಡುಗಿಯು ಅಪ್ರಾಪ್ತ ವಯಸ್ಸಿನವಳಾಗಿದ್ದಾಗ (ಎಂದರೆ 18 ವರ್ಷಗಳಿಗಿಂತ ಕಡಿಮೆ) ವರದಕ್ಷಿಣೆಯನ್ನು ತೆಗೆದುಕೊಂಡಿದ್ದರೆ ಅದನ್ನು ಅವಳು 18 ವರ್ಷ ವಯಸ್ಸು ತಲುಪಿದ ಮೂರು ತಿಂಗಳೊಳಗಾಗಿ ಆಕೆಗೆ ಕೊಡಬೇಕು.

- ವರದಕ್ಷಿಣೆಯನ್ನು ಹುಡುಗಿಯಲ್ಲದೆ ಇತರ ವ್ಯಕ್ತಿಯು ಇಟ್ಟುಕೊಂಡರೆ ಆಗ ಅಂಥ ವ್ಯಕ್ತಿಯು ಸೂಕ್ತ ಕಾಲದಲ್ಲಿ ಅದನ್ನು ಹುಡುಗಿಗೆ ಕೊಡಲು ಜವಾಬ್ದಾರನಾಗಿರಬೇಕು. ಅವನು ಅಥವಾ ಅವಳು ವರದಕ್ಷಿಣೆಯನ್ನು ಯಾರಿಗೂ ಮಾರಾಟ ಮಾಡಬಾರದು, ಖರ್ಚು ಮಾಡಬಾರದು, ಬಳಸಬಾರದು ಅಥವಾ ಯಾರಿಗೂ ಕೊಡಬಾರದು.

- ಯಾವನೇ ವ್ಯಕ್ತಿಯು ಕಾನೂನಿನಲ್ಲಿ ನಿರ್ದಿಷ್ಟಪಡಿಸಿರುವ ಅವಧಿಯೊಳಗಾಗಿ ವರದಕ್ಷಿಣೆಯನ್ನು ಹುಡುಗಿಗೆ ಹಿಂದಿರುಗಿಸದಿದ್ದರೆ, ಅವಳು, ದೂರು ಸಲ್ಲಿಸಬಹುದು. ಅಂಥ ವ್ಯಕ್ತಿಯನ್ನು 6 ತಿಂಗಳಿಂದ 2 ವರ್ಷಗಳವರೆಗಿನ ಕಾರಾವಾಸ ಅಥವಾ 5,000 ರೂಪಾಯಿಯಿಂದ 10,000 ರೂ. ಗಳವರೆಗಿನ ಜುಲ್ಮಾನೆ ಅಥವಾ ಇವೆರಡರಿಂದಲೂ ದಂಡಿಸಬಹುದಾಗಿದೆ.

- ಒಬ್ಬ ಹೆಂಗಸು ವರದಕ್ಷಿಣೆಯನ್ನು ಸ್ವೀಕರಿಸುವುದಕ್ಕೆ ಮುಂಚೆಯೇ ಮೃತಳಾದರೆ ಅವಳ ವಾರಸುದಾರರು ಅದನ್ನು ಹಿಂದೆ ಪಡೆಯಬಹುದು.

**ಮದುವೆಯಲ್ಲಿ ತೆಗೆದುಕೊಂಡ ಎಲ್ಲ ಉಡುಗೊರೆಗಳನ್ನು ಪಟ್ಟಿ ಮಾಡುವುದು ಅವಶ್ಯಕ.**

ವರನಿಗೆ ಕೊಡಲಾದ ಉಡುಗೊರೆ ಪಟ್ಟಿಯನ್ನು ಅವನು ಇಟ್ಟುಕೊಂಡಿರಬೇಕು. ವಧುವಿಗೆ ಕೊಡಲಾದ ಉಡುಗೊರೆ ಪಟ್ಟಿಯನ್ನು ಅವಳು ಇಟ್ಟುಕೊಂಡಿರಬೇಕು.

- ಈ ಪಟ್ಟಿಯನ್ನು ವಿವಾಹ ಕಾಲದಲ್ಲಿ ಅಥವಾ ವಿವಾಹವಾದ ಕೂಡಲೇ ಮಾಡಬೇಕು.
- ಪಟ್ಟಿಯು ಲಿಖಿತದಲ್ಲಿರಬೇಕು.
- ಪಟ್ಟಿಯಲ್ಲಿ ಪ್ರತಿಯೊಂದು ಉಡುಗೊರೆಯ ಸಂಕ್ಷಿಪ್ತ ವಿವರಣೆ ಇರಬೇಕು.
- ಉಡುಗೊರೆಯ ಸರಿಸುಮಾರು ಬೆಲೆಯನ್ನು ನಮೂದಿಸಿರಬೇಕು.
- ಉಡುಗೊರೆ ನೀಡಿದ ವ್ಯಕ್ತಿಯ ಹೆಸರನ್ನು ಬರೆಯಬೇಕು.
- ಉಡುಗೊರೆ ನೀಡುವ ವ್ಯಕ್ತಿಯು ಸಂಬಂಧಿಯಾಗಿದ್ದರೆ, ವಧು ಅಥವಾ ವರನೊಂದಿಗೆ ಅವರಿಗಿರುವ ಸಂಬಂಧವನ್ನು ಸೂಚಿಸಿರಬೇಕು.
- ಪಟ್ಟಿಗೆ ವಧು ಮತ್ತು ವರ ಇಬ್ಬರ ಸಹಿಯೂ ಇರಬೇಕು.
- ಹುಡುಗ ಅಥವಾ ಹುಡುಗಿ ಅನಕ್ಷರಸ್ಥರಾಗಿದ್ದರೆ, ಪಟ್ಟಿಯನ್ನು ಅವರ ಮುಂದೆ ಓದಿದ ನಂತರ ಪಟ್ಟಿಯಲ್ಲಿ ಅವರ ಹೆಬ್ಬೆಟ್ಟು ಗುರುತನ್ನು ಹಾಕಿರಬೇಕು.
- ವಿವಾಹಕ್ಕೆ ಹಾಜರಾದ ಸಂಬಂಧಿಗಳು ಅಥವಾ ಯಾವನೇ ಒಬ್ಬ ವ್ಯಕ್ತಿ ಪಟ್ಟಿಗೆ ಸಹಿ ಮಾಡಬೇಕೆಂದು ವಧು ಮತ್ತು ವರನು ಅಪೇಕ್ಷಿಸಿದಲ್ಲಿ ಅವರ ಸಹಿ ಪಡೆಯಬೇಕು.

ಕಾನೂನನ್ನು 30 ವರ್ಷಗಳ ಹಿಂದೆಯೇ ರಚಿಸಲಾಗಿದೆ. ಆದರೂ ವರದಕ್ಷಿಣೆ ಪದ್ಧತಿಯು ಈಗಲೂ ಚಾಲ್ತಿಯಲ್ಲಿದೆ ಏಕೆ ? ಕಾನೂನು ರಚಿಸಿದರಷ್ಟೇ ಸಾಲದು. ನಾವೂ ಈ ಅನಿಷ್ಟ ಪದ್ಧತಿಯನ್ನು ತೊಲಗಿಸಲು ಕಾನೂನನ್ನು ಉಪಯೋಗಿಸಬೇಕು.

ಅನೇಕ ವೇಳೆ ವರದಕ್ಷಿಣೆಗಾಗಿ ಹುಡುಗಿಗೆ ಕಿರುಕುಳ ಕೊಡುವುದು, ಹೊಡೆಯುವುದು ಅವಳನ್ನು ನಿಂದಿಸುವುದು, ಕೊಲ್ಲುವುದು ಇವುಗಳೆಲ್ಲ ವಿವಾಹದ ನಂತರ ನಡೆಯುತ್ತದೆ. ಕೆಲವು ವೇಳೆ ಕಿರುಕುಳ ಸಹಿಸಲಾರದೆ ಆಕೆ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಅಂಥ ಪ್ರಕರಣಗಳಲ್ಲಿ ಅಪರಾಧಿಗಳನ್ನು ದಂಡಿಸುವುದಕ್ಕೆಂದೇ ಕ್ರಿಮಿನಲ್ ಕಾನೂನಿನಲ್ಲಿ ವಿಶೇಷ ಉಪಬಂಧಗಳನ್ನು ಕಲ್ಪಿಸಲಾಗಿದೆ.

ಈ ಕಾನೂನುಗಳು ಯಾವುವೆಂದರೆ - **ಭಾರತ ದಂಡ ಸಂಹಿತೆ, 1860, ದಂಡ ಪ್ರಕ್ರಿಯಾ ಸಂಹಿತೆ 1973 ಮತ್ತು ಭಾರತೀಯ ಸಾಕ್ಷ್ಯ ಅಧಿನಿಯಮ.**

ಭಾರತ ದಂಡ ಸಂಹಿತೆಯ ಈ ಕಾನೂನಿನ 498 ಎ ಪ್ರಕರಣ ಎಂತೆಂಥ ಕಾರ್ಯವು ಅಪರಾಧವಾಗುತ್ತದೆ ಎಂದು ತಿಳಿಸುತ್ತದೆ. ಇದರ ಪ್ರಕಾರ ಒಬ್ಬ ಮಹಿಳೆಯನ್ನು ಕ್ರೌರ್ಯಕ್ಕೆ ಒಳಪಡಿಸುವಂಥ ಅವಳ ಪತಿ ಅಥವಾ ಪತಿಯ ಸಂಬಂಧಿಯು ಮೂರು ವರ್ಷಗಳವರೆಗೆ ವಿಸ್ತರಿಸಬಹುದಾದ ಕಾರಾವಾಸ ಮತ್ತು ಜುಲ್ಮಾನೆಯಿಂದ ದಂಡಿತರಾಗುತ್ತಾರೆ.

**ಕ್ರೌರ್ಯವೆಂದರೇನು ?**

- ಗಾಯವಾಗುವಂತೆ ಅಥವಾ ಅವಳ ಪ್ರಾಣಕ್ಕೆ, ಯಾವುದೇ ಅವಯವಕ್ಕೆ ಅಥವಾ ಆರೋಗ್ಯಕ್ಕೆ ಅಪಾಯವಾಗುವಂತೆ ಒಬ್ಬ ಹೆಂಗಸಿಗೆ ಹೊಡೆಯುವುದು ಅಥವಾ ಕಿರುಕುಳ ಕೊಡುವುದು. ಇದರಲ್ಲಿ ಮಾನಸಿಕ ಮತ್ತು ದೈಹಿಕ ಕ್ರೌರ್ಯವೂ ಸೇರುತ್ತದೆ.

- ಕ್ರೌರ್ಯವೆಂದರೆ ಹೊಡೆಯುವುದು ಅಥವಾ ದೈಹಿಕ ಹಿಂಸೆ ಕೊಡುವುದು ಮಾತ್ರ ಎಂದು ಅರ್ಥವಲ್ಲ. ಮಹಿಳೆಯನ್ನು ಆತ್ಮಹತ್ಯೆ ಮಾಡಿಕೊಳ್ಳುವುದಕ್ಕೆ ಪ್ರೇರೇಪಿಸುವ ಯಾರೊಬ್ಬರ ನಡತೆಯೂ ಕ್ರೌರ್ಯವಾಗುತ್ತದೆ.

- ಹಣ ಅಥವಾ ಸ್ವತ್ತಿಗಾಗಿ ಒಬ್ಬ ಹೆಂಗಸನ್ನು ಚಿತ್ರಹಿಂಸೆಗೆ ಗುರಿಪಡಿಸುವುದು, ಹೆದರಿಸುವುದು ಅಥವಾ ಬಲಾತ್ಕಾರ ಮಾಡುವುದು ಸಹಾ ಕ್ರೌರ್ಯವಾಗುತ್ತದೆ.

- ಹಣ ಅಥವಾ ಸ್ವತ್ತನ್ನು ಕೊಡುವಂತೆ ಅವಳ ಸಂಬಂಧಿಗೆ ಚಿತ್ರಹಿಂಸೆ ಕೊಡುವುದು, ಹೆದರಿಸುವುದು ಅಥವಾ ಬಲಾತ್ಕಾರಿಸುವುದು ಸಹ ಕ್ರೌರ್ಯವಾಗುತ್ತದೆ ಮತ್ತು ಕಾನೂನಿನ ಮೇರೆಗೆ ದಂಡನೀಯವಾಗುತ್ತದೆ.




ಯಾರೇ ಒಬ್ಬ ಮಹಿಳೆಯನ್ನು ಈ ರೀತಿಯಲ್ಲಿ ಕ್ರೂರವಾಗಿನಡೆಸಿಕೊಂಡಿದ್ದು, ಅವಳು ಮದುವೆಯ 7 ವರ್ಷಗಳೊಳಗಾಗಿ ಅಸ್ವಾಭಾವಿಕವಾಗಿ ಮೃತಳಾದರೆ ಅವಳ ಗಂಡ ಮತ್ತು ಅತ್ತೆ ಮಾವಂದಿರು ಅವಳ ಮರಣಕ್ಕೆ ಜವಾಬ್ದಾರರೆಂದು ತಿಳಿಯಲಾಗುವುದು. ಅವರು ತಪ್ಪಿತಸ್ಥರೆಂದು ಕಂಡುಬಂದರೆ ಅವರನ್ನು ಕಡೇ ಪಕ್ಷ 7 ವರ್ಷಗಳವರೆಗೆ ಜೈಲಿಗೆ ಕಳುಹಿಸಲಾಗುವುದು. ಅವಳ ಸಾವು ಗಂಡ ಅಥವಾ ಅತ್ತೆ ಮಾವಂದಿರಿಂದ ಉಂಟಾಗಿದೆ ಎಂದು ನ್ಯಾಯಾಲಯವು ಭಾವಿಸುತ್ತದೆ. ಈ ಅಪರಾಧವನ್ನು ಸಾಬೀತುಪಡಿಸುವ ಅಗತ್ಯವಿಲ್ಲ.

## ಒಬ್ಬ ವಿವಾಹಿತ ಮಹಿಳೆಯು ಕ್ರೌರ್ಯಕ್ಕೆ ಬಲಿಯಾಗಿರುವಳೆಂದು ಯಾರು ದೂರು ಸಲ್ಲಿಸಬಹುದು ?



- ಮಹಿಳೆ (ಕ್ರೌರ್ಯಕ್ಕೆ ಬಲಿಯಾಗಿರುವವಳು) ಖುದ್ದಾಗಿ
- ಅವಳ ತಂದೆ
- ಅವಳ ತಾಯಿ
- ಅವಳ ಸಹೋದರ
- ಅವಳ ಸಹೋದರಿ
- ಅವಳ ಚಿಕ್ಕಮ್ಮಂದಿರು ಅಥವಾ ಸೋದರತ್ತೆಯರು
- ರಕ್ತ ಸಂಬಂಧಿಗಳು ಅಥವಾ ವಿವಾಹದ ಮೂಲಕ ಅಥವಾ ದತ್ತು ಮೂಲಕ ಆದ ಸಂಬಂಧಿಗಳು ಯಾರೇ ಆಗಲಿ ನ್ಯಾಯಾಲಯದ ಅನುಮತಿ ಪಡೆದು ದೂರು ಸಲ್ಲಿಸಬಹುದು.

**(ದಂಡ ಪ್ರಕ್ರಿಯಾಸಂಹಿತೆ 1973ರ 198 ಎ ಪ್ರಕರಣ ನೋಡಿ)**

ಯಾರೇ ಮಹಿಳೆಯು ಆತ್ಮಹತ್ಯೆ ಮಾಡಿಕೊಂಡಿದ್ದು, ಅವಳ ಸಾವಿಗೆ ಕಾರಣ ಬೇರೊಬ್ಬರು ಎಂದು ತೋರಿದರೆ ಕೂಡಲೇ ಪೊಲೀಸಿಗೆ ದೂರು ಸಲ್ಲಿಸಬೇಕು. ಈ ಮಾಹಿತಿಯನ್ನು ಸ್ವೀಕರಿಸಿದ ಮೇಲೆ ಪೊಲೀಸ್ ಠಾಣಾಧಿಕಾರಿಯವರು ಈ ಮುಂದಿನ ಕ್ರಮಗಳನ್ನು ತೆಗೆದುಕೊಳ್ಳಬೇಕು.

- ಸಮೀಪದ ಕಾರ್ಯನಿರ್ವಾಹಕ ಮ್ಯಾಜಿಸ್ಟ್ರೇಟರಿಗೆ ಕೂಡಲೇ ತಿಳಿಸಬೇಕು.
- ಅಧಿಕಾರಿಯು ಮರಣದ ಸ್ಪಷ್ಟ ಕಾರಣಗಳ ಒಂದು ವರದಿಯನ್ನು ಸಿದ್ಧಪಡಿಸಬೇಕು.
- ಮರಣದ ಕಾರಣವನ್ನು ನಿರ್ಧರಿಸುವುದಕ್ಕಾಗಿ ಪೊಲೀಸ್ ಅಧಿಕಾರಿಯು ಮೃತ ವ್ಯಕ್ತಿಯ ದೇಹವಿರುವ ಸ್ಥಳಕ್ಕೆ ಹೋಗಬೇಕು.
- ಅಕ್ಕಪಕ್ಕದಲ್ಲಿ ವಾಸಿಸುತ್ತಿರುವ ಇಬ್ಬರು ಅಥವಾ ಹೆಚ್ಚಿನ ಗೌರವಾನ್ವಿತ ವ್ಯಕ್ತಿಗಳ ಸಮಕ್ಷಮ ವರದಿಯನ್ನು ಸಿದ್ಧಪಡಿಸಬೇಕು.



- ದೇಹದ ಮೇಲೆ ಕಂಡುಬರುವ ಗಾಯಗಳು, ಸುಟ್ಟಗಾಯಗಳು ಮತ್ತು ಇತರ ಗಾಯಗಳನ್ನು ವಿವರಿಸಿ, ಮರಣದ ಕಾರಣವನ್ನು ವರದಿಯಲ್ಲಿ ಕಾಣಿಸಿರಬೇಕು.
- ವರದಿಗೆ ಅಲ್ಲಿರುವಂಥ ಪೊಲೀಸ್ ಅಧಿಕಾರಿ ಮತ್ತು ಇತರ ವ್ಯಕ್ತಿಗಳು ಸಹಿ ಮಾಡಬೇಕು.
- ಆನಂತರ ವರದಿಯನ್ನು ಜಿಲ್ಲಾ ಮ್ಯಾಜಿಸ್ಟ್ರೇಟ್ ಅಥವಾ ಉಪವಿಭಾಗೀಯ ಮ್ಯಾಜಿಸ್ಟ್ರೇಟರಿಗೆ ಕಳುಹಿಸಬೇಕು.
- ಪರೀಕ್ಷೆಗಾಗಿ ದೇಹವನ್ನು ನ್ಯಾಯಾಲಯದ ಸರ್ಜನ್ ಅಥವಾ ನೇಮಕಗೊಂಡ ಇತರ ವೈದ್ಯಾಧಿಕಾರಿಗೆ ಕಳುಹಿಸಬೇಕು.

(ದಂಡ ಪ್ರಕ್ರಿಯಾ ಸಂಹಿತೆ 1973ರ 174ನೇ ಪ್ರಕರಣ)

ಪೊಲೀಸರು ಈ ಕ್ರಮಗಳನ್ನು ತೆಗೆದುಕೊಳ್ಳದಿದ್ದರೆ ಅಥವಾ ತೆಗೆದುಕೊಳ್ಳಲು ನಿರಾಕರಿಸಿದರೆ, ನೀವು ಮೇಲಿನ ಅಧಿಕಾರಿಗೆ ವರದಿ ಮಾಡಿ.

ವರದಕ್ಷಿಣೆ ಪ್ರಕರಣಗಳಲ್ಲಿ ದೂರನ್ನು ಯಾರು ದಾಖಲು ಮಾಡಬೇಕು.

- ಯಾವನೇ ಪೊಲೀಸ್ ಅಧಿಕಾರಿ
- ವರದಕ್ಷಿಣೆ ಬಲಿಯಾಗಿರುವ ಯಾರೇ ವ್ಯಕ್ತಿ.



- ವರದಕ್ಷಿಣೆಗೆ ಬಲಿಯಾಗಿರುವ ವ್ಯಕ್ತಿಯ ತಂದೆ ತಾಯಿ ಅಥವಾ ಯಾರೇ ಸಂಬಂಧಿ
- ಸರ್ಕಾರದಿಂದ ಮಾನ್ಯತೆ ಪಡೆದ ಯಾವುದೇ ಸಮಾಜ ಕಾರ್ಯ ಸಂಸ್ಥೆ
- ನ್ಯಾಯಾಲಯಕ್ಕೆ ಅಂತಹ ಮಾಹಿತಿ ತಿಳಿದು ಬಂದಲ್ಲಿ ಅದು ತಾನೇ ಮೊಕದ್ದಮೆಯನ್ನು ಪ್ರಾರಂಭಿಸಬಹುದು.

ದೂರನ್ನು ಸಲ್ಲಿಸುವುದಕ್ಕೆ ಅಥವಾ ಒಂದು ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡುವುದಕ್ಕೆ ಯಾವುದೇ ಕಾಲಪರಿಮಿತಿಯಿಲ್ಲ. ಆದರೆ ಅಂಥ ದೂರು ಅಥವಾ ಮೊಕದ್ದಮೆಯನ್ನು ಕೂಡಲೇ ಸಲ್ಲಿಸಬೇಕು.

ವರದಕ್ಷಿಣೆಗೆ ಸಂಬಂಧಪಟ್ಟ ಅಪರಾಧಗಳು ಯಾವುವೆಂದರೆ:-

- ಸಂಜ್ಞೇಯ ಅಪರಾಧಗಳು ಎಂದರೆ ದೂರನ್ನು ಸ್ವೀಕರಿಸಿದ ಮೇಲೆ, ಪೊಲೀಸರು ತಾವಾಗಿಯೇ ತನಿಖೆಯನ್ನು ಪ್ರಾರಂಭಿಸುವುದು. ತನಿಖೆ ಮಾಡುವ ಬಗ್ಗೆ ಮ್ಯಾಜಿಸ್ಟ್ರೇಟರಿಂದ ಅವರಿಗೆ ಆದೇಶ ಬರಬೇಕಿಲ್ಲ. ಆದರೆ ಈ ಸಂಬಂಧದಲ್ಲಿ ಯಾರನ್ನಾದರೂ ದಸ್ತಗಿರಿ ಮಾಡಬೇಕಾದರೆ ಅವರು ಮ್ಯಾಜಿಸ್ಟ್ರೇಟರ ಆದೇಶವನ್ನು ಪಡೆದುಕೊಳ್ಳಲೇಬೇಕು.
- ಜಾಮೀನಿಯವಲ್ಲದ ಅಪರಾಧಗಳು:- ಎಂದರೆ ಮ್ಯಾಜಿಸ್ಟ್ರೇಟರ ಆದೇಶವಿಲ್ಲದೆ ಅಪರಾಧಿಯು ಜಾಮೀನು ಪಡೆಯಲಾರದಂಥವುಗಳು.
- ರಾಜಿ ಮಾಡಿಕೊಳ್ಳಲಾಗದ ಅಪರಾಧಗಳು:- ಎಂದರೆ ಒಬ್ಬ ಅಪರಾಧಿಯು ಅಷ್ಟಿಷ್ಟು ಜುಲ್ಮಾನೆಯನ್ನು ಸಂದಾಯ ಮಾಡುವ ಮೂಲಕ ಕಾರಾವಾಸ ಶಿಕ್ಷೆಯಿಂದ ತಪ್ಪಿಸಿ ಕೊಳ್ಳಲಾರದಂಥವುಗಳು.

## ಈ ಮಾಲಿಕೆಯಲ್ಲಿ

'**ನಮ್ಮ ಕಾನೂನುಗಳು**' ಮಹಿಳೆಯರಿಗೆ ಸಾಮಾನ್ಯವಾಗಿ ಅನ್ವಯಿಸುವ ಕಾನೂನುಗಳ ಬಗ್ಗೆ ಸರಳರೀತಿಯಲ್ಲಿ ತಿಳುವಳಿಕೆ-ನೀಡುವ ಹತ್ತು ಪುಸ್ತಿಕೆಗಳ ಒಂದು ಮಾಲಿಕೆಯಾಗಿದೆ. ಈ ಮಾಲಿಕೆಯಲ್ಲಿ, ಕೆಳವರ್ಗದ ಹೆಂಗಸರು, ಅದರಲ್ಲೂ ನವ ಸಾಕ್ಷರ ಮಹಿಳೆಯರು, ಬಳಸಲಿಕ್ಕೆ ಸಾಧ್ಯವಾಗಲಿ ಎನ್ನುವ ಉದ್ದೇಶದಿಂದ ನಿರೂಪಣೆಯನ್ನು ಸಾಧ್ಯವಾದಷ್ಟೂ ಸರಳವಾಗಿ, ಸಂಕ್ಷಿಪ್ತವಾಗಿ, ಎಲ್ಲೆಲ್ಲಿ ಸಾಧ್ಯವೋ ಅಲ್ಲೆಲ್ಲ, ಉಪಮೆಗಳನ್ನ, ಉದಾಹರಣೆಗಳನ್ನ ನೀಡಿ ರಚಿಸಲಾಗಿದೆ. ಯಾರಿಗೆ ಈ ಕಾನೂನುಗಳು ತೀರ ಅವಶ್ಯಕವಿದೆಯೋ ಅಂತಹವರನ್ನ ಈ ಪುಸ್ತಿಕೆಗಳು ತಲುಪಬೇಕೆಂದು ನಮ್ಮ ಆಶಯ. ಈ ಹತ್ತು ಪುಸ್ತಕಗಳು ಕಾನೂನಿನ ಸಮಗ್ರ ಪಾಠವೇನಲ್ಲ. ಒಟ್ಟಾರೆಯಾಗಿ ಮಹಿಳೆಯರಿಗೆ ತಮ್ಮ ನಾಗರೀಕ ಹಕ್ಕುಗಳ ಅರಿವಾಗಲಿ, ಅವರು ಆತ್ಮವಿಶ್ವಾಸದಿಂದ ಹಾಗೂ ಸಂದಿಗ್ಧರಹಿತ ರೀತಿಯಲ್ಲಿ ತಮ್ಮ ಸಮಸ್ಯೆಗಳಿಗೆ ತಾವೇ ಧ್ವನಿಕೊಡುವಂತಾಗಲಿ ಎಂದು ಈ ಮಾಲಿಕೆ ಬಯಸುತ್ತದೆ.

ಈ ಪುಸ್ತಿಕೆಗಳ ಹಿಂದಿ ಅನುವಾದದಲ್ಲಿ, ಈಗಾಗಲೇ ಅವುಗಳನ್ನ, ಗ್ರಾಮೀಣ ಮಹಿಳೆಯರ ಕಾರ್ಯಾಗಾರಗಳಲ್ಲಿ ಬಳಸಿ, ಇವುಗಳ ಪರಿಣಾಮವನ್ನ ಪರೀಕ್ಷಿಸಲಾಗಿದೆ. ಹಲವು ಸಾಮಾಜಿಕ ಕಾರ್ಯಕರ್ತರುಗಳೊಡನೆ, ಕಾನೂನು ತಜ್ಞರುಗಳೊಡನೆ, ನಡೆಸಿದ ಕಾರ್ಯಾಗಾರಗಳಲ್ಲಿ ಕೂಡ ಇವುಗಳ ಬಳಕೆ ಹಾಗೂ ಪರೀಕ್ಷೆ ಆಗಿದೆ. ಆಗ ಬಂದ ಅಭಿಪ್ರಾಯಗಳನ್ನ ಮನನ ಮಾಡಿ ಪುಸ್ತಿಕೆಗಳನ್ನ ತಿದ್ದಿ ಪ್ರಕಟಿಸಲಾಗಿದೆ.

ಈಗ ಕನ್ನಡದಲ್ಲಿ '**ನಮ್ಮ ಕಾನೂನುಗಳು**' ನಿಮ್ಮ ಕೈಸೇರುತ್ತಿದೆ. ಮೇಲೆ ಹೇಳಿದ ಆಶಯಗಳನ್ನ ಗಮನದಲ್ಲಿಟ್ಟುಕೊಂಡು, ಇಲ್ಲಿ ಸಲ್ಲುವ ಉಪಮೆಗಳು, ಉದಾಹರಣೆಗಳನ್ನ, ಬಳಸಿಕೊಂಡು ಹೆಗ್ಗೋಡಿನ **ಕವಿಕಾವ್ಯ ಟ್ರಸ್ಟಿನವರು** ಕನ್ನಡ ಅವತರಣಿಕೆಯನ್ನ ಸಿದ್ದಗೊಳಿಸಿದ್ದಾರೆ. **ಯುನಿಸೆಫ್** ಸಂಸ್ಥೆಯ ಉದಾರ ನೆರವಿನಿಂದಾಗಿ ಇದರ ಪ್ರಕಟಣೆ ಸಾಧ್ಯವಾಗುತ್ತಿದೆ. ಈ ಪುಸ್ತಕಗಳ ಪ್ರಯೋಜನವನ್ನ, ನವಸಾಕ್ಷರ ಮಹಿಳೆಯರು, ದುಡಿಯುವ ಮಹಿಳೆಯರ ಸಂಘಟನೆಗಳು, ಅಂಗನವಾಡಿ ಕಾರ್ಯಕರ್ತೆಯರು, ಪಂಚಾಯತಿ ಹಾಗೂ ತಾಲ್ಲೂಕು ಮಟ್ಟದ ಅಧಿಕಾರಿಗಳು, ಆರೋಗ್ಯ ಕಾರ್ಯಕರ್ತರು, ಶಾಲಾ ಅಧ್ಯಾಪಕರುಗಳು, ಸಾಕ್ಷರತಾ ಕಾರ್ಯಕರ್ತರು, ಹಾಗೂ 'ಡ್ವಾಕ್ರ' ಗುಂಪುಗಳು, ಪಡೆಯಬೇಕೆಂಬ ಉದ್ದೇಶದಿಂದ ಕರ್ನಾಟಕ ರಾಜ್ಯಮಹಿಳಾ ಅಬಿವೃದ್ಧಿ ನಿಗಮ, ವ್ಯಾಪಕ ರೀತಿಯಲ್ಲಿ ಅವುಗಳನ್ನ ಜನತೆಗೆ ತಲುಪಿಸಲು ಏರ್ಪಾಡುಮಾಡಿದೆ.

**ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ನಿಯಮಿತ**

16ನೆಯ ಮಹಡಿ, ಬಹುಪಯೋಗಿ ಕಟ್ಟಡ, ಮಹಾತ್ಮಗಾಂಧಿ ರಸ್ತೆ

ಬೆಂಗಳೂರು : 560001, ಫೋ: 5587418, 5588250

**ಮೂಲ ಪ್ರಕಾಶಕರು**
**ಮಾರ್ಗ್**
113-ಎ, ಶಾಪುರ್ ಜಾಟ್, ಎಷಿಯಾಡ್ ಗ್ರಾಮದ ಸಮೀಪ
ನವದೆಹಲಿ-110016, ಫೊ : 6467463.